# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 208 (214)

ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 02.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರಿನ ಬಿಡದಿ ಸಮೀಪವಿರುವ ಟಯೋಟಾ ಕಿರ್ಲೋಸ್ಕರ್ ಮೋಟಾರ್‌ನ ಆಂತರಿಕ ಕಲಹಗಳಿಗೆ ಕಾರಣವೇನು: | ಅಧ್ಯಕ್ಷರು, ಟೊಯೋಟಾ ಕಿರ್ಲೋಸ್ಕರ್ ಮೋಟಾರ್ ಕಾರ್ಮಿಕ ಸಂಘದವರು ದಿನಾಂಕ 15.10.2020ರಂದು ಮಾನ್ಯ ಕಾರ್ಮಿಕ ಸಚಿವರಿಗೆ ನೀಡಿರುವ ಮನವಿ ಪತ್ರದಲ್ಲಿ ಆಡಳಿತ ಮಂಡಳಿಯವರಿಂದ ಕಾರ್ಮಿಕರು ಈ ಕೆಳಕಂಡಂತೆ ತೊಂದರೆ ಅನುಭವಿಸುತ್ತಿರುವುದಾಗಿ ತಿಳಿಸಿರುತ್ತಾರೆ.<br><br>• ಕೊರೊನ ಸಂಕಷ್ಟದ ಸಮಯದಲ್ಲಿ ಪರಿಸ್ಥಿತಿ ದುರ್ಬಳಕೆ ಮಾಡಿಕೊಂಡು ಹೊಸ ನಿಯಮಗಳ ಹೆಸರಿನಲ್ಲಿ ಆಡಳಿತ ಮಂಡಳಿಯವರು ಕಾರ್ಮಿಕರನ್ನು ಶೋಷಿಸುತ್ತಿದ್ದಾರೆ. ಕಾರುಗಳ ಉತ್ಪಾದನೆಯಲ್ಲಿ ನೇರವಾಗಿ ತೊಡಗುವ ಪ್ರತಿ ಕಾರ್ಮಿಕರು ಮಾಡಬೇಕಾದ ಕೆಲಸವನ್ನು "ಮಿಲಿ ಸೆಕೆಂಡ್" ಗಳನ್ನು ಬಳಸಿ ನಿಗದಿ ಮಾಡಲಾಗುತ್ತದೆ. ಇದು ಅವೈಜ್ಞಾನಿಕ ಕ್ರಮವಾಗಿರುತ್ತದೆ.<br><br>• ನೇರವಾಗಿ ಉತ್ಪಾದನೆಯಲ್ಲಿ ತೊಡಗಿರುವ ಕಾರ್ಮಿಕರು ನೈಸರ್ಗಿಕ ಕರೆಗಳಿಗೆ/ಶೌಚಾಲಯಕ್ಕೆ ಹೋಗಲು ಸಹ ಸಮಯ ನಿರ್ಬಂದಿಸುವುದು, ಶೌಚಾಲಯಕ್ಕೆ ಹೋಗಿ ಬಂದ ಸಮಯಕ್ಕೆ ಸಂಬಳ ಕಡಿತ ಮಾಡುವುದು, ಸಂಬಳ ಕಡಿತ ಮಾಡುವುದರ ಜೊತೆಗೆ ನಿಯಮಬಾಹಿರವಾಗಿ ಕೆಲಸದ ಸ್ಥಳದಿಂದ ತಪ್ಪಿಸಿಕೊಂಡಿದ್ದೀರಿ ಎಂದು ನೋಟಿಸ್ ನೀಡಿ ದೋಷಾರೋಪ ಪಟ್ಟಿ (Charge Sheets) ನೀಡುವುದನ್ನು ಆಡಳಿತ ಮಂಡಳಿಯವರು ಮಾಡುತ್ತಿದ್ದಾರೆ. |
| ಆ | ಆಂತರಿಕ ಕಲಹಗಳಿಂದ ಕಾರ್ಮಿಕರು ಬೀದಿ ಪಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಮುಷ್ಕರ ಕೈಬಿಡುವಂತೆ ಕಾರ್ಮಿಕ ಸಚಿವರು, ರಾಮನಗರ ಜಿಲ್ಲಾ ಉಸ್ತುವಾರಿ ಸಚಿವರ ಸಮ್ಮುಖದಲ್ಲಿ ಕಾರ್ಖಾನೆಯ ಆಡಳಿತ ಮಂಡಳಿ ಹಾಗೂ ಕಾರ್ಮಿಕರ ಮುಖಂಡರೊಡನೆ ಸಂಧಾನ ಸಭೆ ನಡೆಸಲಾಗಿದೆ. ದಿನಾಂಕ 15.01.2021ರಂದು ಕಾರ್ಮಿಕ ಆಯುಕ್ತರಿಗೆ ನೀಡಿರುವ ಪತ್ರದಲ್ಲಿ ಟೊಯೋಟಾ ಕಿರ್ಲೋಸ್ಕರ್ ಮೋಟಾರ್‌ನ ಆಡಳಿತ ಮಂಡಳಿಯು ದಿನಾಂಕ 12.01.2021 ರಿಂದ ಲಾಕ್‌ಔಟ್ ತೆರವುಗೊಳಿಸಿರುವುದಾಗಿ |

| | | |
|---|---|---|
| | | ತಿಳಿಸಿ, ಕಾರ್ಮಿಕರು ಸರಳವಾದ ಮುಚ್ಚಳಿಕೆ ನೀಡಿ ಕೆಲಸಕ್ಕೆ ಹಾಜರಾಗುವಂತೆ ಪ್ರಕಟಿಸಿರುವುದಾಗಿ ತಿಳಿಸಿರುತ್ತಾರೆ. |
| ಇ | ನೌಕರರು ತಮ್ಮ ಬೇಡಿಕೆಗಳಿಗೆ ಒತ್ತಾಯಿಸಿ ಅನಿರ್ಧಿಷ್ಟಾವಧಿವರೆಗೆ ಮುಷ್ಕರ ನಡೆಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; ಇದ್ದಲ್ಲಿ ಇದರ ಪರಿಹಾರಕ್ಕೆ ಕೈಗೊಂಡ ಕ್ರಮಗಳೇನು? | ಸರ್ಕಾರದ ಗಮನಕ್ಕೆ ಬಂದಿದೆ.<br><br>ಸರ್ಕಾರದ ಆದೇಶ ಸಂಖ್ಯೆ LD IDM/411/2020 LD DO-6, ದಿನಾಂಕ 19.11.2020ರಲ್ಲಿ ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 14, 1947)ರ 10ನೇ ಪ್ರಕರಣದ (1)ನೇ ಉಪ-ಪ್ರಕರಣದ(ಸಿ)(ಡಿ) ಖಂಡದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ವಿವಾದವನ್ನು ನ್ಯಾಯ ನಿರ್ಣಯಕ್ಕಾಗಿ ಮತ್ತು ಆರು ತಿಂಗಳ ಒಳಗಾಗಿ ತೀರ್ಪನ್ನು ಒಪ್ಪಿಸಲು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ ಇಲ್ಲಿಗೆ ಕಳುಹಿಸಿದೆ.<br><br>ಈ ಕುರಿತು ಕಾರ್ಮಿಕ ಇಲಾಖೆ ಹೊರಡಿಸಿರುವ ದಿನಾಂಕ 19.11.2020ರ ಆದೇಶದ ಪ್ರತಿಯನ್ನು ಲಗತ್ತಿಸಿದೆ. |

ಸಿಐ 38 ಎಸ್‌ಪಿಐ 2021

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: LD-IDM/411/2020-LD-DO-6

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:19.11.2020.

**ಆದೇಶ**

ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ, ರಾಮನಗರ ಜಿಲ್ಲೆ, ಕಾರ್ಮಿಕ ಸಂಘದಿಂದ ಪ್ರತಿನಿಧಿಸಲ್ಪಡುವ ಸುಮಾರು 3500 ಜನ ಕಾರ್ಮಿಕರು ದಿನಾಂಕ: 09.11.2020 ರಂದು ಮುಷ್ಕರ ಹೂಡಿರುವುದು ಹಾಗೂ ಕಾರ್ಮಿಕರು ಮುಷ್ಕರ ಹೂಡಿರುವುದಕ್ಕೆ ಪ್ರತಿಯಾಗಿ ಆಡಳಿತವರ್ಗದವರು ದಿನಾಂಕ: 10.11.2020 ರಿಂದ ಸಂಸ್ಥೆಗೆ ಲಾಕ್-ಔಟ್ ಘೋಷಿಸಿರುವುದು ಹಾಗೂ ಕಾರ್ಮಿಕರ ಬೇಡಿಕೆಗಳ ಬಗ್ಗೆ ಉಂಟಾದ ಕೈಗಾರಿಕಾ ವಿವಾದ. ಇವರ ಮಧ್ಯೆ ಈ ಕೆಳಕಂಡ ಅಂಶಗಳ ಬಗ್ಗೆ ಕೈಗಾರಿಕಾ ವಿವಾದವಿರುವುದಾಗಿ ಅಭಿಪ್ರಾಯ ಪಟ್ಟಿರುವುದರಿಂದ ನ್ಯಾಯನಿರ್ಣಯಕ್ಕಾಗಿ ವಿವಾದವನ್ನು ಪರಿಶೀಲಿಸುವುದು ಅಗತ್ಯವೆಂದು ಕರ್ನಾಟಕ ಸರ್ಕಾರವು ಪರಿಗಣಿಸಿದೆ:

ಆದ್ದರಿಂದ ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 14, 1947)ರ 10ನೇ ಪ್ರಕರಣದ (1)ನೇ ಉಪ-ಪ್ರಕರಣದ(ಸಿ)(ಡಿ) ಖಂಡದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮೂಲಕ ಸದರಿ ವಿವಾದವನ್ನು ನ್ಯಾಯ ನಿರ್ಣಯಕ್ಕಾಗಿ ಮತ್ತು ಆರು ತಿಂಗಳ ಒಳಗಾಗಿ ತೀರ್ಪನ್ನು ಒಪ್ಪಿಸಲು, **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ** ಇಲ್ಲಿಗೆ ಕಳುಹಿಸಿದೆ.

**ವಾದಾಂಶಗಳು**

1. ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಕಾರ್ಮಿಕ ಸಂಘಟನೆಯಿಂದ ಪ್ರತಿನಿಧಿಸಲ್ಪಡುವ ಕಾರ್ಮಿಕರು ಅನುಬಂಧ-1 ಮನವಿಯಲ್ಲಿ ತಿಳಿಸಿರುವ ವಿವಿಧ ಬೇಡಿಕೆಗಳನ್ನು ಆಡಳಿತವರ್ಗ ನಿಯತವಾಗಿ ಚರ್ಚಿಸಿ ಬಗೆಹರಿಸದೆ ಇರುವುದು ನ್ಯಾಯಸಮ್ಮತವೇ?

2. ಕಾರ್ಮಿಕ ಸಂಘದ ಪದಾಧಿಕಾರಿಯನ್ನು ಶಿಸ್ತು ಕ್ರಮಕ್ಕೆ ಒಳಪಟ್ಟು ಅಮಾನತ್ತು ಮಾಡಿರುತ್ತಾರೆಂಬ ವಿಷಯವನ್ನು ಮುಂದಿಟ್ಟುಕೊಂಡು ದಿನಾಂಕ: 09.11.2020 ರಿಂದ ಮುಷ್ಕರ ಕಾರ್ಮಿಕರು ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಎಂಪ್ಲಾಯೀಸ್ ಯೂನಿಯನ್, ನೇತೃತ್ವದಲ್ಲಿ ಮುಷ್ಕರ ಹೂಡಿರುವುದು ನ್ಯಾಯಸಮ್ಮತವೇ?

3. ದಿನಾಂಕ:09.11.2020 ರಿಂದ ಕಾರ್ಮಿಕರು ಮುಷ್ಕರ ಹೂಡಿರುತ್ತಾರೆಂದು ಆಡಳಿತವರ್ಗದವರಾದ ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ, ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ, ಇವರು ಇದಕ್ಕೆ ಪ್ರತಿಯಾಗಿ ದಿನಾಂಕ: 10.11.2020 ರಿಂದ ಕಾರ್ಖಾನೆಗೆ ಬೀಗಮುದ್ರೆ (ಲಾಕ್-ಔಟ್) ಘೋಷಿಸಿರುವುದು ನ್ಯಾಯಸಮ್ಮತವೇ?

4. ಹಾಗಲ್ಲದಿದ್ದಲ್ಲಿ ಸದರಿ ಕಾರ್ಮಿಕನು ಯಾವ ಪರಿಹಾರಕ್ಕೆ ಅರ್ಹನು?

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

ಹೊರಹೋಗಿದೆ
ದಿನಾಂಕ: 20/11/2020

o/c
(ಸಂಧ್ಯಾ ಎಲ್.ನಾಯಕ್)
ಸರ್ಕಾರದ ಉಪಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಇವರಿಗೆ,
ಅಧ್ಯಕ್ಷಾಧಿಕಾರಿಗಳು, **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ರಾಮನಗರ**.

**ಪ್ರತಿಗಳು:**- 1)ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29. ಇವರ ಪತ್ರ ಸಂ: ಐಡಿಎ-1/ಸಿಆರ್-57/2020-21, ದಿನಾಂಕ: 18.11.2020ಕ್ಕೆ ಉಲ್ಲೇಖಿಸಿದೆ.

2)**ಆಡಳಿತವರ್ಗ:**- ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಲಿಮಿಟೆಡ್, ಪ್ಲಾಟ್ ನಂ.1, ಬಿಡದಿ ಕೈಗಾರಿಕಾ ಪ್ರದೇಶ, ಬಿಡದಿ, ರಾಮನಗರ ಜಿಲ್ಲೆ.

3)**ಅರ್ಜಿದಾರರು:**- ಟೊಯೋಟಾ ಕಿರ್ಲೋಸ್ಕರ್ ಮೋಟರ್ಸ್ ಎಂಪ್ಲಾಯೀಸ್ ಯೂನಿಯನ್, ಪ್ಲಾಟ್ ನಂ.1, ಬಿಡದಿ, ರಾಮನಗರ ಜಿಲ್ಲೆ.